# ಕರ್ನಾಟಕ ವಿಧಾನಸಭೆ

ಹದಿಮೂರನೇ ವಿಧಾನಸಭೆ

(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 01ನೇ ಆಗಸ್ಟ್, 2012

(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ

ಆ) (i) ದಿನಾಂಕ 24.07.2012 ಎರಡನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಮಂಜು. ಎ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 29 (305) : ಸಹಕಾರ ಸಚಿವರು

(ii) ದಿನಾಂಕ 30.07.2012 ಆರನೇ ಪಟ್ಟಿಯಿಂದ ತಡೆಹಿಡಿಯಲಾದ ಡಾ॥ ಬಗಲಿ ಸಾರ್ವಭೌಮ ಸಾತಗೌಡ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 84 (348) : ಪರಿಸರ ಮತ್ತು ಜೀವಿಶಾಸ್ತ್ರ ಹಾಗೂ ಯೋಜನೆ ಮತ್ತು ಸಾಂಖ್ಯಿಕ ಸಚಿವರು

(iii) ದಿನಾಂಕ 25.07.2012 ಮೂರನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 40 (423) : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರ

ಕಾರ್ಯದರ್ಶಿಯವರು:– ವಿಧಾನ ಪರಿಷತ್ತಿನಿಂದ ಅಂಗೀಕೃತವಾದ ರೂಪದಲ್ಲಿರುವ ಕರ್ನಾಟಕ ಪೊಲೀಸ್ (ತಿದ್ದುಪಡಿ) ವಿಧೇಯಕ, 2012 ನ್ನು ಸಭೆಯ ಮುಂದಿಡುವುದು.

ಮು.ತಿ.ನೋ

## 3. ಶಾಸನ ರಚನೆ

### I ವಿಧೇಯಕವನ್ನು ಮಂಡಿಸುವುದು

**1) ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2012**
**ಶ್ರೀ ಕೆ.ಎಸ್. ಈಶ್ವರಪ್ಪ , ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರು) ಅವರು:–**

ಅ) 2012ನೇ ಸಾಲಿನ ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

### II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**1) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2012**
**ಶ್ರೀ ಸಿ.ಟಿ. ರವಿ (ಉನ್ನತ ಶಿಕ್ಷಣ ಸಚಿವರು) ಅವರು:–**

ಅ. 2012ನೇ ಸಾಲಿನ ರಾಜ್ಯ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2) ಕರ್ನಾಟಕ ಶಿಕ್ಷಣ (ತಿದ್ದುಪಡಿ)ವಿಧೇಯಕ,2012**
**ಶ್ರೀ ಸಿ.ಟಿ. ರವಿ (ಉನ್ನತ ಶಿಕ್ಷಣ ಸಚಿವರು) ಅವರು:–**

ಅ.2012ನೇ ಸಾಲಿನ ಕರ್ನಾಟಕ ಶಿಕ್ಷಣ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**3) ಕರ್ನಾಟಕ ಪಶು ವೈದ್ಯಕೀಯ, ಪಶು ಮತ್ತು ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2012**
**ಶ್ರೀ ರೇವುನಾಯಕ ಬೆಳಮಗಿ (ಪಶುಸಂಗೋಪನೆ, ಸಮೂಹ ಶಿಕ್ಷಣ, ಸಾರ್ವಜನಿಕ ಗ್ರಂಥಾಲಯಗಳು, ಸಣ್ಣ ಉಳಿತಾಯಗಳು ಮತ್ತು ಲಾಟರಿಗಳ ಸಚಿವರು) ಅವರು:–**

ಅ. 2012ನೇ ಸಾಲಿನ ಪಶು ವೈದ್ಯಕೀಯ, ಪಶು ಮತ್ತು ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ (ತಿದ್ದುಪಡಿ)
ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಮು.ತಿ.ನೋ

**4) ಮಣಿಪಾಲ ವಿಶ್ವವಿದ್ಯಾಲಯ ವಿಧೇಯಕ, 2012**

**ಶ್ರೀ ಸಿ.ಟಿ. ರವಿ (ಉನ್ನತ ಶಿಕ್ಷಣ ಸಚಿವರು) ಅವರು:–**

ಅ. 2012ನೇ ಸಾಲಿನ ಮಣಿಪಾಲ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**5) ಕರ್ನಾಟಕ ಕೃಷಿ ವಿಶ್ವವಿದ್ಯಾಲಯ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2012**

**ಶ್ರೀ ಉಮೇಶ್ ವಿ. ಕತ್ತಿ (ಕೃಷಿ ಸಚಿವರು) ಅವರು:–**

ಅ. 2012ನೇ ಸಾಲಿನ ಕೃಷಿ ವಿಶ್ವವಿದ್ಯಾಲಯ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**6) ಅರ್ಕ ವಿಶ್ವವಿದ್ಯಾಲಯ ವಿಧೇಯಕ, 2012**

**ಶ್ರೀ ಸಿ.ಟಿ. ರವಿ (ಉನ್ನತ ಶಿಕ್ಷಣ ಸಚಿವರು) ಅವರು:–**

ಅ. 2012ನೇ ಸಾಲಿನ ಅರ್ಕ ವಿಶ್ವವಿದ್ಯಾಲಯ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ. ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**7) ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ (ತಿದ್ದುಪಡಿ) ವಿಧೇಯಕ, 2012**

**ಶ್ರೀ ಬಸವರಾಜ್ ಬೊಮ್ಮಾಯಿ (ಜಲಸಂಪನ್ಮೂಲ ಸಚಿವರು) ಅವರು:–**

ಅ) 2012ನೇ ಸಾಲಿನ ಕರ್ನಾಟಕ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**8) ಕರ್ನಾಟಕ ಹೋಮಿಯೋಪತಿ ವೃತ್ತಿಗಾರರ (ತಿದ್ದುಪಡಿ) ವಿಧೇಯಕ, 2012**

**ಶ್ರೀ ಅರವಿಂದ ಲಿಂಬಾವಳಿ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು) ಅವರು:–**

ಅ) 2012ನೇ ಸಾಲಿನ ಕರ್ನಾಟಕ ಹೋಮಿಯೋಪತಿ ವೃತ್ತಿಗಾರರ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**9) ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ (ತಿದ್ದುಪಡಿ) ವಿಧೇಯಕ, 2012**

**ಶ್ರೀ ಜಗದೀಶ ಶೆಟ್ಟರ್ (ಮುಖ್ಯಮಂತ್ರಿಗಳು) ಅವರು:–**

ಅ) 2012ನೇ ಸಾಲಿನ ನಾಗರಿಕರಿಗೆ ಸೇವೆಗಳ ಖಾತರಿ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

ಪು.ತಿ.ನೋ

**10) ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2012**

**ಶ್ರೀ ಕೆ.ಎಸ್. ಈಶ್ವರಪ್ಪ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರು) ಅವರು:–**

ಅ) 2012ನೇ ಸಾಲಿನ ಕರ್ನಾಟಕ ಭೂ ಸುಧಾರಣೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**11) ಕರ್ನಾಟಕ ಪೊಲೀಸ್ (ತಿದ್ದುಪಡಿ) ವಿಧೇಯಕ, 2012**

**ಶ್ರೀ ಆರ್. ಅಶೋಕ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರು) ಅವರು:–**

ಅ) ಕರ್ನಾಟಕ ವಿಧಾನ ಪರಿಷತ್ತಿನಿಂದ ಅಂಗೀಕೃತವಾದ ರೂಪದಲ್ಲಿರುವ 2012ನೇ ಸಾಲಿನ ಕರ್ನಾಟಕ ಪೊಲೀಸ್ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 4. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಅಶೋಕ್ ಮಹದೇವಪ್ಪ ಪಟ್ಟಣ ಅವರು ಕೇಂದ್ರ ಸರ್ಕಾರದ ವಿವಿಧ ಸಚಿವರುಗಳಿಗೆ ಹಾಗೂ ಕಾರ್ಯದರ್ಶಿಗಳಿಗೆ ಪತ್ರ ವ್ಯವಹಾರವನ್ನು ನಡೆಸುವಾಗ ಆಯಾ ಶಾಸಕರುಗಳಿಗೆ ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ತೆಗೆದುಕೊಳ್ಳಲಾದ ಕ್ರಮದ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ಇಲಾಖೆಯವರು ಒದಗಿಸುವ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

2. ಶ್ರೀಯುತರಾದ ಹೆಚ್.ಡಿ. ರೇವಣ್ಣ, ಬಂಡೆಪ್ಪ ಕಾಶಂಪುರ, ಹಾಗೂ ಇತರರು ಬೆಂಗಳೂರು ಹಾಗೂ ಹೊರ ವಲಯದಲ್ಲಿ ಕೊಲೆ ಸುಲಿಗೆಗಳು ಅವ್ಯಾಹತವಾಗಿ ಹೆಚ್ಚಾಗಿದ್ದು, ಇದಕ್ಕೆ ಪೊಲೀಸ್ ಅಧಿಕಾರಿಗಳು ಪರೋಕ್ಷವಾಗಿ ಕಾರಣವಾಗಿರುವ ಬಗ್ಗೆ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರ) ಯವರ ಗಮನ ಸೆಳೆಯುವುದು.

3. ಶ್ರೀ ಎನ್. ಸಂಪಂಗಿ ಅವರು ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ರಿಜಿಸ್ಟ್ರಾರ್ ಮತ್ತು ಕುಲಪತಿಗಳ ನಡುವೆ ಹೊಂದಾಣಿಕೆ ಇಲ್ಲದೆ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವ ಬಗ್ಗೆ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

4. ಶ್ರೀ ಡಿ.ಕೆ. ಶಿವಕುಮಾರ್ ಅವರು ಕನಕಪುರ ನಗರವನ್ನು ಬೆಂಗಳೂರಿನ ಪೂರಕ ನಗರವನ್ನಾಗಿ ಅಭಿವೃದ್ಧಿಪಡಿಸಲು ಸಮಗ್ರ ಯೋಜನೆ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸುವಲ್ಲಿ ವಿಳಂಬವಾಗುತ್ತಿರುವ ಬಗ್ಗೆ ನಗರಾಭಿವೃದ್ಧಿ, ಕಾನೂನು, ನ್ಯಾಯ, ಮಾನವ ಹಕ್ಕುಗಳು, ಸಂಸದೀಯ ವ್ಯವಹಾರಗಳು, ಶಾಸನ ರಚನೆ ಹಾಗೂ ಬೆಂಗಳೂರು ಜಲ ಮಂಡಳಿ ಸಚಿವರ ಗಮನ ಸೆಳೆಯುವುದು.

ಮು.ತಿ.ನೋ

5. ಶ್ರೀ ಹೆಚ್.ಡಿ. ರೇವಣ್ಣ ಅವರು ಮೈಸೂರು ಉಪ ವಿಭಾಗ ಕಂದಾಯ ಇಲಾಖೆ ವ್ಯಾಪ್ತಿಗೆ ಸೇರಿದ ಮೈಸೂರು, ಮಂಡ್ಯ, ಹಾಸನ ಹಾಗೂ ಕೊಡಗು ಜಿಲ್ಲೆಗಳಲ್ಲಿ ಖಾಲಿ ಇರುವ ಉಪ ತಹಶೀಲ್ದಾರ್ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

6. ಶ್ರೀಯುತರಾದ ಸಿದ್ದರಾಮಯ್ಯ ಮತ್ತು ಇ. ತುಕಾರಂ ಅವರು ಬಳ್ಳಾರಿ ಜಿಲ್ಲೆ ಸಂಡೂರು ಮತ ಕ್ಷೇತ್ರದಲ್ಲಿ ಬರುವ ಹಲವು ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

7 ಶ್ರೀ ವೀರಭದ್ರಪ್ಪ ಹಾಲಹರವಿ ಹುಬ್ಬಳ್ಳಿ ಗಬ್ಬೂರು ಬೈಪಾಸ್‌ನಿಂದ ವರ್ತಲದ ಚತುಷ್ಪಥ ರಸ್ತೆ ನಿರ್ಮಾಣದ ಬಗ್ಗೆ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

8. ಶ್ರೀ ನೆ.ಲ ನರೇಂದ್ರಬಾಬು ಅವರು ರಾಜ್ಯದ ಶಾಸಕರುಗಳಿಗೆ ಕೆಲಸದ ಒತ್ತಡ ಹೆಚ್ಚಾಗಿದ್ದು ಇನ್ನೊಬ್ಬ ಆಪ್ತ ಸಹಾಯಕರ ಅವಶ್ಯಕತೆ ಇರುವುದರ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

9. ಶ್ರೀ ಹೆಚ್. ಹಾಲಪ್ಪ ಅವರು ಪ್ರಸಿದ್ಧ ಯಾತ್ರಾ ಸ್ಥಳವಾದ ಸಿಗಂದೂರಿಗೆ ಹೋಗಲು ಹೊಸ ಲಾಂಚ್‌ಗಳನ್ನು ಒದಗಿಸುವಲ್ಲಿ ವಿಳಂಬವಾಗುತ್ತಿರುವ ಬಗ್ಗೆ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ ಸಚಿವರ ಗಮನ ಸೆಳೆಯುವುದು.

10. ಶ್ರೀ ಸೈಯದ್ ಯಾಸಿನ್ ಅವರು ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಈಗಾಗಲೇ ಹಣ ಮಂಜೂರಾತಿ ದೊರೆತ್ತಿದ್ದರೂ ಪೂರ್ಣಗೊಳ್ಳದೆ ವಿಳಂಬವಾಗುತ್ತಿರುವುದರಿಂದ ಭಾರತೀಯ ವೈದ್ಯಕೀಯ ಸಂಸ್ಥೆಯ ನಿಯಮಾವಳಿಗಳನ್ವಯ ಅನರ್ಹಗೊಳ್ಳುವ ಸಾಧ್ಯತೆ ಬಗ್ಗೆ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

11. ಶ್ರೀ ಯು.ಟಿ ಖಾದರ್ ಅವರು ಮಂಗಳೂರಿನಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಇಲ್ಲದೇ ಇರುವುದರಿಂದ ಉಂಟಾಗುತ್ತಿರುವ ತೊಂದರೆಯ ಬಗ್ಗೆ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

12. ಶ್ರೀ ಪಿ.ಎಂ. ನರೇಂದ್ರ ಸ್ವಾಮಿ ಅವರು ಬೆಂಗಳೂರು ವಿಶ್ವ ವಿದ್ಯಾನಿಲಯದ ಸಸ್ಯಶಾಸ್ತ್ರ ವಿಭಾಗದಲ್ಲಿ ಯು.ಜಿ.ಸಿ.– ಬಿ.ಎಸ್.ಆರ್ ನಿಧಿ ಯೋಜನೆಯಡಿ ಆಯ್ಕೆಯಾದ 5 ಜನ ಸಂಶೋಧನಾ ಅಭ್ಯರ್ಥಿಗಳಿಗೆ ಪಿ.ಹೆಚ್.ಡಿ. ಪದವಿಗೆ ಪ್ರವೇಶ ನೀಡದಿರುವ ಬಗ್ಗೆ ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

13. ಶ್ರೀಯುತರಾದ ಸಿದ್ದರಾಮಯ್ಯ, ಹೆಚ್.ಡಿ.ರೇವಣ್ಣ, ಟಿ.ಬಿ. ಜಯಚಂದ್ರ ಹಾಗೂ ಇತರರು ಭಾರತ ಸಂವಿಧಾನಕ್ಕೆ 97ನೇ ತಿದ್ದುಪಡಿಯನ್ನು ದಿನಾಂಕ: 15.02.2012ರಿಂದ ಜಾರಿಗೊಳಿಸಲಾಗಿದ್ದು ಸದರಿ ತಿದ್ದಪಡಿಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮಕ್ಕೆ ತಿದ್ದುಪಡಿ ತರುವಲ್ಲಿ ಆಗಿರುವ ವಿಳಂಬದ ಬಗ್ಗೆ ಸಹಕಾರ ಸಚಿವರ ಗಮನ ಸೆಳೆಯುವುದು.

ಪು.ತಿ.ನೋ

14. ಡಾ॥ ಎ.ಬಿ. ಮಾಲಕರೆಡ್ಡಿ, ಸಿ.ಎಸ್. ನಾಡಗೌಡ, ಹೆಚ್.ಎಸ್. ಮಹದೇವ ಪ್ರಸಾದ್ ಹಾಗೂ ಇತರರು ಹಿರಿಯ ಪತ್ರಕರ್ತ ಲಿಂಗಣ್ಣ ಸತ್ಯಂಪೇಟೆ ಅವರ ನಿಗೂಢ ಸಾವಿನ ತನಿಖೆಯನ್ನು ಚುರುಕುಗೊಳಿಸುವ ಬಗ್ಗೆ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರ) ಯವರ ಗಮನ ಸೆಳೆಯುವುದು.

15. ಶ್ರೀ ಸಂಜಯ ಪಾಟೀಲ್ ಅವರು ಬೆಳಗಾವಿ ತಾಲ್ಲೂಕಿನ ರಾಕಸಕೊಪ್ಪ ಡ್ಯಾಂ ಯೋಜನೆಯಡಿ ಮುಳುಗಡೆಯಾದ ಬೆಳವಟ್ಟಿ ಗ್ರಾಮವನ್ನು ಯೋಜನಾ ನಿರಾಶ್ರಿತರ ಪಟ್ಟಿಯಲ್ಲಿ ಸೇರ್ಪಡೆಗೊಳಿಸಿ ಯೋಜನಾ ನಿರಾಶ್ರಿತರಿಗೆ ಮೂಲ ಸೌಲಭ್ಯ ಕಲ್ಪಿಸಿಕೊಡುವ ವಿಚಾರದ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

16. ಶ್ರೀ ಗೂಳಿಹಟ್ಟಿ ಡಿ. ಶೇಖರ್ ಅವರು ಶ್ರೀ ಅಕಾಶ ಪ್ರಮೋದ ನಾಂದವಾಡೆಕರ ಸಾ॥ ವಡಗಾವಿ, ಬೆಳಗಾವಿ ಇವರನ್ನು ದಿನಾಂಕ: 15.03.2012ರಂದು ಬಂಧಿಸಿ ಇದುವರೆಗೆ ಬಿಡುಗಡೆ ಮಾಡದಿರುವ ಬಗ್ಗೆ ಅಬಕಾರಿ ಸಚಿವರ ಗಮನ ಸೆಳೆಯುವುದು.

17. ಡಾ॥ ಶರಣ ಪ್ರಕಾಶ್ ರುದ್ರಪ್ಪ ಪಾಟೀಲ್ ಅವರು ಚಿಂಚೋಳಿ ತಾಲ್ಲೂಕು ರಾಯಕೋಡ ಗ್ರಾಮದ ಹಿಂದುಳಿದ ವರ್ಗದ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ ಸಮಾಜ ಕಲ್ಯಾಣ ಮತ್ತು ಬಂಧೀಖಾನೆ ಸಚಿವರ ಗಮನ ಸೆಳೆಯುವುದು.

18. ಶ್ರೀಯುತರಾದ ಅಮರೇಶ, ಡಿ.ಎಂ.ಐಹೊಳೆ ಮತ್ತು ವೀರಭದ್ರಪ್ಪ ಹಾಲಹರವಿ ಅವರು ನ್ಯಾಯಮೂರ್ತಿ ಎ.ಜೆ. ಸದಾಶಿವ ಆಯೋಗದ ಪರಿಶಿಷ್ಟ ಜಾತಿ ಸಮೀಕ್ಷೆ ವರದಿಯನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸಿದ ಬಗ್ಗೆ ಮತ್ತು ಸದರಿ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಬಗ್ಗೆ ಮುಖ್ಯ ಮಂತ್ರಿಯವರ ಗಮನ ಸೆಳೆಯುವುದು.

19. ಶ್ರೀ ಹೆಚ್.ಡಿ. ರೇವಣ್ಣ ಅವರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಹುದ್ದೆಗಳನ್ನು ಭರ್ತಿ ಮಾಡದಿರುವುದರಿಂದ ಇಲಾಖೆಯಲ್ಲಿರುವ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ನಿಷ್ಕ್ರೀಯಗೊಂಡಿರುವ ಬಗ್ಗೆ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

20. ಶ್ರೀಯುತರಾದ ಹೆಚ್.ಡಿ.ರೇವಣ್ಣ ಮತ್ತು ಕೆ.ಎಂ. ಶಿವಲಿಂಗೇಗೌಡ ಅವರು ಮುಜರಾಯಿ ಇಲಾಖೆ ದೇವಸ್ಥಾನಗಳಿಗೆ ವ್ಯವಸ್ಥಾಪನ ಸಮಿತಿ ರಚಿಸಲು ಸರ್ಕಾರ ತೆಗೆದುಕೊಂಡ ಕ್ರಮದ ಬಗ್ಗೆ ಮುಜರಾಯಿ ಸಚಿವರ ಗಮನ ಸೆಳೆಯುವುದು.

21. ಶ್ರೀ ಕೆ.ಜೆ.ಜಾರ್ಜ್ ಅವರು ಸರ್ವಜ್ಞನಗರ ವಿಧಾನಸಭಾ ಕ್ಷೇತ್ರದಲ್ಲಿ ಬರುವ ಬಾಣಸವಾಡಿಯಲ್ಲಿ ಇರುವ ಗ್ರಂಥಾಲಯದ ಕಟ್ಟಡದ ಕಾಮಗಾರಿಯು ಪೂರ್ಣಗೊಳ್ಳದಿರುವ ಬಗ್ಗೆ ಲೋಕಶಿಕ್ಷಣ, ಸಾರ್ವಜನಿಕ ಗ್ರಂಥಾಲಯ, ಸಣ್ಣ ಉಳಿತಾಯ ಹಾಗೂ ಲಾಟರಿ ಮತ್ತು ಪಶುಸಂಗೋಪನೆ ಸಚಿವರ ಗಮನ ಸೆಳೆಯುವುದು.

22. ಶ್ರೀ ಲಾಲಾಜಿ ಆರ್ ಮೆಂಡನ್ ಅವರು ಕಾಪು ವಿಧಾನಸಭಾ ಕ್ಷೇತ್ರದ ಪೌದೂರು ಪ್ರದೇಶದಲ್ಲಿ ತೈಲ ಸಂಸ್ಕರಣ ಘಟಕದ ಕಾಮಗಾರಿಯಿಂದಾಗಿ ಕುಡಿಯುವ ನೀರಿನ ಅಭಾವವುಂಟಾಗಿದ್ದು ಸರಿಪಡಿಸುವ ಬಗ್ಗೆ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

23. ಶ್ರೀ ರಘುಪತಿ ಭಟ್ ಕೆ. ಅವರು ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕುಡುಬಿ ಜನಾಂಗದವರನ್ನು ಪರಿಶಿಷ್ಟ ಜಾತಿಗೆ ಸೇರಿಸುವ ಕುರಿತು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಕಳುಹಿಸುವ ಬಗ್ಗೆ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

24. ಶ್ರೀ ಕೆ.ಎಂ.ಶಿವಲಿಂಗೇಗೌಡ ಅವರು ಬಹುತೇಕ ಹಳ್ಳಿಗಳಲ್ಲಿ ಕುಡಿಯುವ ನೀರಿನ ಯೋಜನೆಗಳು ವಿಳಂಬವಾಗುತ್ತಿರುವ ಬಗ್ಗೆ ಉಪ ಮುಖ್ಯಮಂತ್ರಿ (ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಸಚಿವರ) ಯವರ ಗಮನ ಸೆಳೆಯುವುದು.

25. ಶ್ರೀ ನೆಹರು ಚ ಓಲೇಕಾರ ಅವರು ಹಾವೇರಿ ನಗರದಲ್ಲಿ ಟ್ರಾಫಿಕ ಪೋಲೀಸ್ ಠಾಣೆಯನ್ನು ಮಂಜೂರು ಮಾಡುವ ಬಗ್ಗೆ ಉಪ ಮುಖ್ಯಮಂತ್ರಿ (ಗೃಹ ಮತ್ತು ಸಾರಿಗೆ ಸಚಿವರ) ಯವರ ಗಮನ ಸೆಳೆಯುವುದು.

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಎಂ.ಬಿ.ಪಾಟೀಲ್, ಅಪ್ಪಾಸಾಹೇಬ ಮಲ್ಲಪ್ಪ ಪಟ್ಟಣಶೆಟ್ಟಿ ಹಾಗೂ ಇತರರು ಡೋಣಿ ನದಿ ಪ್ರವಾಹ ನಿಯಂತ್ರಣ ಮತ್ತು ಹೂಳು ತುಂಬುವಿಕೆಗೆ ಸಮಗ್ರ ಪರಿಹಾರದ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಮುಂದುವರೆದ ಚರ್ಚೆ.

2. ಶ್ರೀಯುತರುಗಳಾದ ಹೆಚ್.ಡಿ.ರೇವಣ್ಣ, ಬಂಡೆಪ್ಪ ಖಾಶೆಂಪೂರ, ವೆಂಕಟರಾವ್ ನಾಡಗೌಡ, ಕೆ.ಎಂ.ಶಿವಲಿಂಗೇಗೌಡ ಹಾಗೂ ಇತರರು ರಾಜ್ಯದಲ್ಲಿರುವ ಸಹಕಾರ ಸಂಘಗಳಲ್ಲಿ ಹಣ ದುರುಪಯೋಗ ಹಾಗೂ ಫಲಾನುಭವಿಗಳಿಗೆ ಸಿಗಬೇಕಾದ ಸೌಲಭ್ಯಗಳನ್ನು ಒಬ್ಬನೇ ಉಪಯೋಗಿಸುತ್ತಿದ್ದಾರೆಂದು ದಿನಾಂಕ: 17.07.2012ರಂದು ಮಾನ್ಯ ಸಹಕಾರ ಸಚಿವರ ಪತ್ರಿಕಾ ಹೇಳಿಕೆಯ ಕುರಿತು ಚರ್ಚೆ.

ಪು.ತಿ.ನೋ

3. ಶ್ರೀಯುತರುಗಳಾದ ಹೆಚ್.ಡಿ.ರೇವಣ್ಣ, ಬಂಡೆಪ್ಪ ಖಾಶೆಂಪೂರ, ವೆಂಕಟರಾವ್ ನಾಡಗೌಡ ಹಾಗೂ ಇತರರು ರಾಜ್ಯದಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ನಿರಂತರ ವಿದ್ಯುತ್ ಸರಬರಾಜು ಮಾಡುವ ಉದ್ದೇಶದಿಂದ 175 ತಾಲ್ಲೂಕುಗಳಲ್ಲಿ 5 ವಿದ್ಯುತ್ ಸರಬರಾಜು ಕಂಪನಿಗಳ ನಿರಂತರ ಜ್ಯೋತಿ ಕಾಮಗಾರಿಯು 2 ವರ್ಷಗಳಲ್ಲಿ ಗುಜರಾತ್ ಮಾದರಿಯಲ್ಲಿ ಪೂರ್ಣಗೊಳಿಸುವ ವಿಚಾರ ಕುರಿತು ಚರ್ಚೆ.

4. ಶ್ರೀಯುತರುಗಳಾದ ಸಿದ್ದರಾಮಯ್ಯ, ವಿ.ಶ್ರೀನಿವಾಸ ಪ್ರಸಾದ್, ಡಾ|| ಹೆಚ್.ಸಿ. ಮಹದೇವಪ್ಪ ಹಾಗೂ ಇತರರು ಕೇಂದ್ರ ಸರ್ಕಾರವು 2012-13ನೇ ಸಾಲಿನಿಂದ ಜಾರಿಗೆ ತಂದಿರುವ RTE ಕಾಯ್ದೆಯನ್ನು ಜಾರಿಗೊಳಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿರುವ ವಿಚಾರ ಕುರಿತು ಚರ್ಚೆ.

## 6. ಅರ್ಧ ಗಂಟೆ ಕಾಲಾವಧಿ ಚರ್ಚೆ

ಶ್ರೀ ಬಿ.ಬಿ ರಾಮಸ್ವಾಮಿಗೌಡ, ಅವರು ಕುಣಿಗಲ್ ತಾಲ್ಲೂಕಿನಲ್ಲಿ ಬಗರ್ ಹುಕುಂ ಸಮಿತಿಯ ಮುಂದಿರುವ ಅರ್ಜಿಗಳ ವಿಲೇವಾರಿ ಬಗ್ಗೆ ದಿನಾಂಕ 24.07.2012ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 2ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ 169(670)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)